# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರದಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **363** |
| ಉತ್ತರಿಸಬೇಕಾದ ದಿನಾಂಕ | : | 03.02.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ರಾಜ್ಯದಲ್ಲಿ ಆಗಸ್ಟ್ 2019 ರಲ್ಲಿ ಉಂಟಾದ ಭಾರಿ ಮಳೆ (ಅತಿವೃಷ್ಟಿ)ಯಿಂದ ಹಾನಿಗೊಳಗಾದ ಮನೆಗಳ ಮರುನಿರ್ಮಾಣಕ್ಕೆ ಪರಿಹಾರ ಒದಗಿಸುವಲ್ಲಿ ನಡೆದಿರುವ ಲೋಪದೋಷಗಳಿಂದಾಗಿ ಬಾಕಿ ಉಳಿದ ಅರ್ಹ ಫಲಾನುಭವಿಗಳು ನಿರಾಶ್ರಿತರಾಗಿ ಪರಿಹಾರಕ್ಕಾಗಿ ಅಲೆದಾಡುತ್ತಿರುವ ವಿಚಾರ ಸರ್ಕರದ ಗಮನಕ್ಕೆ ಬಂದಿದೆಯೇ ; | ಸರ್ಕಾರದ ನಿಯಮಾವಳಿಗಳನ್ವಯ ನೆರೆ ಸಂತ್ರಸ್ಥರ ಪುನರ್‌ವಸತಿ ಯೋಜನೆಯಡಿ ನೆರೆ ಸಂತ್ರಸ್ಥರ ಕುಟುಂಬಗಳಿಗೆ ಪುನರ್ ವಸತಿ ಕಲ್ಪಿಸುವಲ್ಲಿ ಪುನರಾವರ್ತನೆ ಆಗುವುದನ್ನು ತಪ್ಪಿಸುವ ಉದ್ದೇಶದಿಂದ ತಂತ್ರಾಂಶದಲ್ಲಿ ಸಂತ್ರಸ್ಥರ ವಿವರಗಳನ್ನು ನಮೂದಿಸುವಾಗ ಫಲಾನುಭವಿಗಳ ಪಡಿತರಚೀಟಿ ಸಂಖ್ಯೆ (Ration Card) ಮತ್ತು ಬ್ಯಾಂಕ್ ಖಾತಾ ಸಂಖ್ಯೆಯನ್ನು ನಮೂದಿಸುವುದನ್ನು ಕಡ್ಡಾಯಗೊಳಿಸಲಾಗಿರುತ್ತದೆ. ಅದರಂತೆ 2019-20 ನೇ ಸಾಲಿನಲ್ಲಿ ಉಂಟಾದ ನೆರೆಹಾವಳಿಯಿಂದ ಹಾನಿಗೊಳಗಾದ ಮನೆಗಳನ್ನು ತಹಶೀಲ್ದಾರ್ ರವರು ಸರ್ವೆ ಮಾಡಿ ತಂತ್ರಾಂಶದಲ್ಲಿ ನಮೂದಿಸಿರುವ ಒಟ್ಟು 133513 ಅರ್ಹ ಸಂತ್ರಸ್ಥರಿಗೆ ಜಿಲ್ಲಾಧಿಕಾರಿಗಳು ಅನುಮೋದನೆಯನ್ನು ನೀಡಿರುತ್ತಾರೆ. ವಿವರ ಕೆಳಕಂಡಂತಿದೆ. |
| (ಆ) | ಹಾಗಿದ್ದಲ್ಲಿ ಬಾಕಿ ಉಳಿದ ನಿರಾಶ್ರಿತ ಅರ್ಹ ಫಲಾನುಭವಿಗಳಿಗೆ ಪರಿಹಾರ ಒದಗಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ; (ವಿವರ ಒದಗಿಸುವುದು) ; | |
| (ಇ) | ಭಾರಿ ಪ್ರವಾಹದಿಂದ ಮನೆ ಕಳೆದುಕೊಂಡು ನೊಂದ ಅರ್ಹ ಫಲಾನುಭವಿಗಳು ಪರಿಹಾರಕ್ಕಾಗಿ ಜಿಲ್ಲಾಧಿಕಾರಿಗಳ ಕಛೇರಿ ಮುಂದೆ ಧರಣಿ ನಡೆಸಿದ್ದರೂ ಪರಿಹಾರ ಒದಗಿಸದೇ ಬಾಕಿ ಉಳಿಯಲು ಕಾರಣಗಳೇನು ; ಈ ಲೋಪದೋಷಗಳನ್ನು ಸರಿಪಡಿಸಲು ಸರ್ಕಾರ ತೆಗೆದು ಕೊಂಡ ಕ್ರಮಗಳೇನು ; | |
| (ಈ) | ಕೆಲವು ಕಾರಣಾಂತರಗಳಿಂದ ನೊಂದ ಅರ್ಹ ಫಲಾನುಭವಿಗಳ ಬಾಕಿ ಉಳಿದ ಪರಿಹಾರಕ್ಕಾಗಿ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ವರದಿ ಮಾಡಿದ್ದರೂ ಅವರಿಗೆ ಪರಿಹಾರ ಒದಗಿಸಲು ವಿಳಂಬ ಧೋರಣೆ ತಾಳಲು ಕಾರಣಗಳೇನು ; | |

| **ವರ್ಗ** | | **2019-20** |
|---|---|---|
| ಸಂಪೂರ್ಣ (ಎ) | ಅಧಿಕೃತ | 10495 |
| | ಅನಧಿಕೃತ | 452 |
| ಭಾಗಶಃ (ಪುನರ್ ನಿರ್ಮಾಣ) (ಬಿ2) | ಅಧಿಕೃತ | 25950 |
| | ಅನಧಿಕೃತ | 151 |
| ಭಾಗಶಃ (ದುರಸ್ಥಿ) (ಬಿ1) | ಅಧಿಕೃತ | 2889 |
| | ಅನಧಿಕೃತ | 58 |
| ಅಲ್ಪಸ್ವಲ್ಪ (ಸಿ) | ಅಧಿಕೃತ | 91069 |
| | ಅನಧಿಕೃತ | 2449 |
| **ಒಟ್ಟು** | | **133513** |

ಮೇಲಿನ ಕೋಷ್ಟಕದಲ್ಲಿ ತಿಳಿಸಿರುವಂತೆ ಜಿಲ್ಲಾಧಿಕಾರಿಗಳು ಅನುಮೋದಿಸಿರುವ ಸಂತ್ರಸ್ಥರನ್ನು ಹೊರತುಪಡಿಸಿ, 2019 ನೇ ಸಾಲಿನ ನೆರೆಹಾವಳಿಯಿಂದ ಹಾನಿಗೊಳಗಾದ ಮನೆಗಳಿಗೆ ಸಂಬಂಧಿಸಿದಂತೆ ಕೆಲವು

| | | |
|---|---|---|
| (ಉ) | ಬಾಕಿ ಉಳಿದ ನೊಂದ ಅರ್ಹ ಫಲಾನುಭವಿಗಳಿಗೆ ಯಾವ ಕಾಲಮಿತಿಯಲ್ಲಿ ಪರಿಹಾರ ಒದಗಿಸಲಾಗುವುದು ? | ಜಿಲ್ಲೆಗಳಿಂದ. ಸ್ವೀಕೃತವಾದ ಪ್ರಸ್ತಾವನೆಯಲ್ಲಿ ,9092 ನೆರೆಸಂತ್ರಸ್ಥರ ಮನೆಗಳ ವಿವರಗಳನ್ನು ದಾಖಲಿಸಲು ಪಡಿತರ ಚೀಟಿ, ಆಧಾರ್ ಕಾರ್ಡ್ ಲಭ್ಯವಿಲ್ಲದೆ ಹಾಗೂ ಇನ್ನಿತರ ಕಾರಣದಿಂದ ನಿಗಮದ ತಂತ್ರಾಂಶದಲ್ಲಿ ನಮೂದಿಸಲು ಸಾಧ್ಯವಾಗಿರುವುದಿಲ್ಲವೆಂದು ಜಿಲ್ಲಾಧಿಕಾರಿಗಳು ನಿಗಮಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.<br><br>ಸದರಿ ಸಂತ್ರಸ್ಥರ ಮನೆಗಳನ್ನು ತಂತ್ರಾಂಶದಲ್ಲಿ ನಮೂದಿಸುವ ಪ್ರಸ್ತಾವನೆಯು ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ :ವಇ 48 ಹೆಚ್‌ಎಎಂ 2021

**(ವಿ. ಸೋಮಣ್ಣ)**
ವಸತಿ ಸಚಿವರು